# ದೀವಟಿಗೆ

ವಾರಪತ್ರಿಕೆ, ಸಂಪಾದಕ: ಸಿರಿಮನೆ ನಾಗರಾಜ್.

ಖಾಸಗಿ ಪ್ರಸಾರಕ್ಕಾಗಿ ೨೭-೬-೮೨ ಭಾನುವಾರ ೨೦



## ಬೊಂಬಾಯಿಗೆ ಬರಲು ಯುವತಿಗೆ ಬಲವಂತ ಅಕ್ಕ, ತಾಯಿ, ಸಂಗಡಿಗರ ಬಂಧನ

**ಕೊಪ್ಪ: ಇಲ್ಲಿಂದ ಬೊಂಬಾಯಿಗೆ ಹುಡುಗಿಯೊಬ್ಬಳನ್ನು ಬಲವಂತವಾಗಿ ಸಾಗಿಸಲು ಯತ್ನಿಸಿದ ಐವರು ಬಂಧನಕ್ಕೊಳಗಾಗಿದ್ದಾರೆ.**

ಬೆಂಗಳೂರಿನಲ್ಲಿ ಎಂ. ಡಿ. ನಾರಾಯಣ್ ರವರ ಮನೆಯಲ್ಲಿ ಅಡಿಗೆಯವರಾಗಿರುವ ಡಿಸೋಜ ಎಂಬುವರ ಹೆಂಡತಿ ಶರ್ಫಿನ್ ಡಿಸೋಜ ತಮ್ಮ ಗಂಡನಿಂದ ಬೇರೆಯಾಗಿ ಹಿರಿಯ ಮಗಳು ಲೋಬಿಯೊಂದಿಗೆ ಹದಿನೆಂಟು ವರ್ಷಕ್ಕೆ ಮೇಲ್ಪಟ್ಟು ಬೊಂಬಾಯಿಯಲ್ಲಿದ್ದವರು. ಕಿರಿ ಮಗಳು ಎಪ್ರಿಪಾನ್ ಕಾರ್ಕಳ್‌ನಲ್ಲಿ ಅಜ್ಜಿಯ ಜೊತೆಗಿದ್ದಳು.

ಈ ಚೆಗೆ ಡಿಸೋಜರವರು ೩ ತಿಂಗಳ ರಜೆಯ ಮೇಲೆ ಊರಿಗೆ ಬಂದಿದ್ದಾಗ ತಮ್ಮ ಸಂಗಡಿಗರಾದ ರಾಜು, ಕೆ. ಲವಿಟ್ರ್ ಸಿಂಗ್, ಫರ್ನಾಂಡಿಸ್‌ರೊಂದಿಗೆ ಊರಿಗೆ ಬಂದ ಶರ್ಫಿನ್ ಎಪ್ರಿಯನ್ನು ಬೊಂಬಾಯಿಗೆ ತಮ್ಮ ಜೊತೆ ಬರುವಂತೆ ಬಲವಂತಪಡಿಸ ಕೊಡಗಿವರೆಂದು ಹೇಳಲಾಗಿದೆ. ಹುಡುಗಿ ಒಪ್ಪದಿದ್ದಾಗ ಜೂನ್ ೧೩ ರ ಭಾನುವಾರ ಆಕೆ ಚರ್ಚಿಗೆ ಬಂದಿದ್ದಾಗ ಪುನಃ ಬಲವಂತಪಡಿಸಿದರೆಂದೂ, ಆಗ ಚರ್ಚಿನ ಪಾದ್ರಿಗಳು ಮತ್ತು ಹುಡುಗಿ ಕೊಟ್ಟ ದೂರಿನ ಮೇಲೆ ಕೊಪ್ಪ ಪೋಲೀಸರು ರೋಸಿ, ಶರ್ಫಿನ್ ಸೇರಿದಂತೆ ಐದು ಜನರನ್ನೂ ಬಂಧಿಸಿದರೆಂದೂ ತಿಳಿದು ಬಂದಿದೆ. ಅವರು ತಂದಿದ್ದ ಟ್ಯಾಕ್ಸಿಯನ್ನು (ಎಂ ಆರ್ ಒ ೨೩೭) ಪೋಲೀಸರು ವಶಪಡಿಸಿಕೊಂಡಿದ್ದಾರೆ.

ಆರೋಪಿಗಳನ್ನು ನ. ರಾ. ಪುರ ನ್ಯಾಯಾಲಯದಲ್ಲಿ ಹಾಜರುಪಡಿಸಲಾಗಿ ನ್ಯಾಯಾಂಗ ಕಸ್ಟಡಿಗೆ ಒಪ್ಪಿಸಲಾಗಿತ್ತು. ೧೯ ರಂದು ಅವರೆಲ್ಲರನ್ನೂ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆಯೆಂದು ಗೊತ್ತಾಗಿದೆ.

### ನ. ರಾ. ಪುರ ತಾ॥ನಲ್ಲಿ ಜಮೀನು ಹಂಚಿಕೆ

ನ. ರಾ. ಪು.: ಈ ತಾಲೂಕಿನ ದರ್ಖಾಸ್ತು ಸಮಿತಿಯ ಸಭೆ ಮೇ ೨೯ ರಂದು ನಡೆದು, ತಾಲೂಕಿನಲ್ಲಿ ಹರಿಜನರಿಗೆ ೫೧ ಎಕರೆ ೧ ಗುಂಟೆ, ಗಿರಿಜನರಿಗೆ ೧ ಎ. ೩೯ ಗುಂಟೆ, ಹಾಗೂ ಇತರೆ ೫೭ ಎಕರೆ ಭೂಮಿಯನ್ನು ಮಂಜೂರು ಮಾಡಲಾಗಿದೆ.

ತಾ॥ನಲ್ಲಿ ಇನ್ನೂ ಮಂಜೂರಾತಿಗೆ ಲಭ್ಯವಿರುವ ಜಮೀನಿನ ಪಟ್ಟಿ ತಯಾರಿಸಲಾಗುತ್ತಿದ್ದು ಜುಲೈನಲ್ಲಿ ಪುನಃ ಸೇರಲಿರುವ ಸಮಿತಿ ಸಭೆಯಲ್ಲಿ ಎಲ್ಲ ಅರ್ಜಿಗಳನ್ನೂ ಇತ್ಯರ್ಥಗೊಳಿಸುವ ಉದ್ದೇಶವಿದೆಯೆಂದು ತಹಸೀಲ್ದಾರ್ ಜಿ. ಸಿ. ರಾಜಶೇಖರ್ 'ದೀವಟಿಗೆ' ಗೆ ತಿಳಿಸಿದರು.

**ಸಿಮೆಂಟ್ ಹಂಚಿಕೆ.**

ಕಳೆದ ತಿಂಗಳಿನಂತೆಯೇ ಈ ತಿಂಗಳೂ ಸಹ ತಾಲೂಕಿಗೆ ೩೭೨ ಮೂಟೆ ಸಿಮೆಂಟ್ ಮಂಜೂರಾಗಿದ್ದು, ಫೆ. ೧೫ ರವರೆಗಿನ ಎಲ್ಲ ಅರ್ಜಿಗಳನ್ನೂ ಇತ್ಯರ್ಥಗೊಳಿಸಲಾಗಿದೆಯೆಂದೂ ತಹಸೀಲ್ದಾರ್ ತಿಳಿಸಿದರು.

ಈ ಹಂಚಿಕೆಯಲ್ಲಿ ರಾ. ಗ್ರಾ. ಉದ್ಯೋಗ ಯೋಜನೆ, ಸಗಣಿ ಅನಿಲ ಸ್ಥಾವರಗಳು ಹಾಗೂ ದೇವಸ್ಥಾನಗಳಿಗೆ ಆದ್ಯತೆ ಕೊಡಲಾಗಿದೆಯೆಂದೂ ಅವರು ತಿಳಿಸಿದರು.

**ಬಾಳೆಹೊನ್ನೂರಿಗೆ ಭೇಟಿ**

ಬಾಳೆಹೊನ್ನೂರು ಮತ್ತು ಸುತ್ತಮುತ್ತ ಗ್ರಾಮಗಳವರು ಶಾಲಾ ಮಕ್ಕಳಿಗೋಸ್ಕರ ಆದಾಯ ಸರ್ಟಿಫಿಕೇಟುಗಳನ್ನು ಪಡೆಯಲು ತಹಸೀಲ್ದಾರರನ್ನು ಪ್ರತಿ ಮಂಗಳವಾರ ಅಲ್ಲಿನ ಪ್ರವಾಸಿ ಮಂದಿರದಲ್ಲಿ ಬೆ. ೧೦ ರಿಂದ ಸಂಜೆ ೫ ರ ವರೆಗೆ ಭೇಟಿ ಮಾಡಬಹುದೆಂದೂ ಅವರು ತಿಳಿಸಿದ್ದಾರೆ.

### ೫ ಮಕ್ಕಳ ತಾಯಿ ಸೇರಿದಂತೆ
## ಇಬ್ಬರನ್ನು ಬೊಂಬಾಯಿಗೆ ಸಾಗಿಸಿದವನ ಬಂಧನ

ಕೊಪ್ಪ: ಈ ತಾಲೂಕಿನ ಕೆಲವೆಡೆ ಮತ್ತು ಬಿದರಗೋಡಿನ ಸುತ್ತಮುತ್ತ ಹುಡುಗಿಯರನ್ನು ಬೊಂಬಾಯಿಗೆ ಸಾಗಿಸುವ ಚಟುವಟಿಕೆ ಪುನಃ ಬಿರುಸಿನಿಂದ ನಡೆಯುತ್ತಿದೆಯೆಂದು ವರದಿಯಾಗಿದೆ.

ಒಬ್ಬಳು ೫ ಮಕ್ಕಳ ತಾಯಿಯೂ ಸೇರಿದಂತೆ ಇಬ್ಬರು ಮಹಿಳೆಯರನ್ನು ಕಳೆದ ತಿಂಗಳ ೨೫ ರಂದು ಬೊಂಬಾಯಿಗೆ ಸಾಗಿಸಿದ ಯೋಗೀಶ ಎಂಬಾತನನ್ನು ಕೊಪ್ಪ ಪೋಲೀಸರು ಬಂಧಿಸಿದ್ದಾರೆ.

ಕೋಡಿಹಿತ್ಲಿನಲ್ಲಿ ಕೂಲಿ ಕೆಲಸ ಮಾಡುವ ಎಂ.ಕೆ. ಬಾಬು ಎಂಬವರ ಹೆಂಡತಿ ರತಿ ಮತ್ತು ಗೋಪಾಲ ಎಂಬವನ ಹೆಂಡತಿ ಸುಲೋಚನಾ (೫ ಮಕ್ಕಳ ತಾಯಿ) ಎಂಬಿಬ್ಬರನ್ನು ಕೊಪ್ಪ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಪುಟ್ಟಸ್ವಾಮಿಗೌಡರು ಬೊಂಬಾಯಿಯಿಂದ ಪತ್ತೆ ಹಚ್ಚಿ ಜೂನ್ ೧೬ ರಂದು ಹಿಂದಕ್ಕೆ ಕರೆ ತಂದಿದ್ದಾರೆ.

ಆರೋಪಿ ಯೋಗೀಶ ಈ ಹಿಂದೆಯೂ ಇಂಥದೇ ಪ್ರಕರಣಗಳಲ್ಲಿ ಸಿಕ್ಕಿಬಿದ್ದಿದ್ದು, ಈಗ ನ್ಯಾಯಾಂಗ ಸುಪರ್ದಿನಲ್ಲಿದ್ದಾನೆ. ಈ ಇಬ್ಬರೂ ಬಡತನ ತಾಳಲಾರದೆ ಸ್ವಂತ ಇಚ್ಛೆಯಿಂದ ಬೊಂಬಾಯಿಗೆ ಹೋಗಿದ್ದಾಗಿ ತಿಳಿಸಿದರೆಂದು ಪೋಲೀಸರು ತಿಳಿಸಿದ್ದಾರೆ.

### ಪಿ. ಯು. ಸಿ. ಫಲಿತಾಂಶ
## ಶೃಂಗೇರಿಗೆ ರ್‍ಯಾಂಕ್

ಶೃಂಗೇರಿ: ಈ ವರ್ಷದ ಎರಡನೇ ಪಿ. ಯು. ಸಿ. ಪರೀಕ್ಷೆಯಲ್ಲಿ ಇಲ್ಲಿನ ಜೆ. ಸಿ. ಬಿ. ಎಂ ಕಾಲೇಜು ವಿದ್ಯಾರ್ಥಿ ಲೋಬೋ ೧೦ ನೇ ರ್‍ಯಾಂಕ್ ಪಡೆದಿದ್ದಾರೆ.

ಕಾಲೇಜು ಪ್ರಾರಂಭವಾದ ವರ್ಷ ಒಂದು ರ್‍ಯಾಂಕ್ ಬಂದಿದ್ದು ಹದಿನಾರು ವರ್ಷಗಳ ನಂತರ ಕಾಲೇಜು ಪುನಃ ರ್‍ಯಾಂಕ್ ಪಡೆದಿದೆ. ಕಾಲೇಜಿನ ಒಟ್ಟು ಫಲಿತಾಂಶ ಶೇ. ೮೩.

**ಕೊಪ್ಪ**

ಇಲ್ಲಿನ ಸರ್ಕಾರಿ ಕಿರಿಯ ಕಾಲೇಜಿನಲ್ಲಿ ೧೦೬ ಜನ ಪರೀಕ್ಷೆ ಕಟ್ಟಿ ೫೫ ಜನ ಪಾಸಾಗಿದ್ದಾರೆ. ಶೇಕಡಾವಾರು ೫೦. ಇದು ಕಳೆದ ವರ್ಷಕ್ಕಿಂತ ಶೇ. ೧ ಜಾಸ್ತಿ. ಪ್ರಥಮ ದರ್ಜೆ ೧೨, ದ್ವಿತೀಯ ೨೨, ಮತ್ತು ತೃತೀಯ ದರ್ಜೆ ೧೯.

**ಹರಿಹರಪುರ**

ಇಲ್ಲಿನ ಕಿರಿಯ ಕಾಲೇಜಿಗೆ ಶೇ. ೭೦.೮ ರ ಫಲಿತಾಂಶ ಬಂದಿರುವುದಾಗಿ ತಿಳಿದು ಬಂದಿದೆ.

ಸಗೋತ್ರ ವಿವಾಹ:

# ಹರಿಹರಪುರ ಗುರುಗಳ ಅಭಿಪ್ರಾಯ

ಸಗೋತ್ರ ವಿವಾಹದ ಬಗ್ಗೆ ನಮ್ಮ ಪತ್ರಿಕೆಯಲ್ಲಿ ನಡೆದಿರುವ ಚರ್ಚೆಗೆ ಸಂಬಂಧಿಸಿದಂತೆ ಎರಡು ಸಲ ಹರಿಹರಪುರ ಗುರುಗಳನ್ನು ಭೇಟಿ ಮಾಡಿ ಅವರ ಅಭಿಪ್ರಾಯವನ್ನು ಪಡೆದಿದ್ದೇವೆ.

"ಬಹಿರಂಗ ಪತ್ರ ಬರೆಯುವುದು ಯಾವಾಗೆಂದರೆ ಆಕ್ಷೇಪಣೆ ಅಥವಾ ಟೀಕೆ ಮಾಡುವುದಿದ್ದಾಗ; ಅಥವಾ, ನಮ್ಮಿಂದ ಸರಿಯಾದ ಉತ್ತರ ಸಿಕ್ಕದಿದ್ದಾಗ. ಅಲ್ಲದೆ, ಬಹಿರಂಗ ಪತ್ರಕ್ಕೆ ನಾವು ಉತ್ತರ ಕೊಡಲೇಬೇಕೆಂದೇನೂ ಇಲ್ಲ" ಎಂಬ ಅಭಿಪ್ರಾಯ ಗುರುಗಳಿಂದ ಬಂತು.

ನಮ್ಮ ಪತ್ರದಲ್ಲಿ (ತಾ. ೧೫-೪-೮೧) ಟೀಕೆಯಾಗಲಿ ಆಕ್ಷೇಪಣೆಯಾಗಲಿ ಇಲ್ಲ. ಸಮಾಜದಲ್ಲಿ ಜೀವಂತವಾಗಿರುವ ಒಂದು ಸಮಸ್ಯೆಯ ಬಗ್ಗೆ ಅವರ ಅಭಿಪ್ರಾಯ ಎಲ್ಲರಿಗೂ ತಿಳಿಯಲಿ, ತಪ್ಪಿದ್ದರೆ ತಿದ್ದಿಕೊಳ್ಳಲು ಸಹಾಯಕವಾಗಲಿ ಎಂಬ ಸದುದ್ದೇಶದಿಂದ ಮಾತ್ರ ಬರೆದದ್ದು. ಓದುಗರ ಪತ್ರಗಳಲ್ಲಾದರೂ ಅಷ್ಟೆ; ಎಲ್ಲೂ ಅನುಚಿತವಾದದ್ದಾಗಲಿ, ನಿಂದಯುದಾಗಲಿ, ಒಂದು ಪತ್ರವೂ ಪ್ರಕಟವಾಗಿಲ್ಲ. (ನಮ್ಮನ್ನೇ ನಿಂದಿಸುವ ಪತ್ರವೇ ಒಂದು ಪ್ರಕಟವಾಗಿದೆ!)

"ನಾವು ಜಗದ್ಗುರುಗಳಲ್ಲ. ಎಲ್ಲೂ ಬಳಸುವುದಿಲ್ಲ. ಕೇವಲ ಶಿವಳ್ಳಿ ಬ್ರಾಹ್ಮಣರಿಗೆ-ಸುಮಾರು ೧೨೦೦ ಮನೆಗಳಿಗೆ-ನಾವು ಗುರುಗಳು. ಈ ಸಮಸ್ಯೆ ಎಲ್ಲಾ ಬ್ರಾಹ್ಮಣರಿಗೂ ಸಂಬಂಧಿಸಿದ್ದು. ಅದಕ್ಕೆ ಉತ್ತರ ಕೊಡಲು ಶೃಂಗೇರಿ ಜಗದ್ಗುರುಗಳು ಬಾಧ್ಯರು ಮತ್ತು ನಮಗಾದರೂ ಯಾವುದೇ ಆಚರಣೆಯ ಬದಲಾವಣೆಗೆ ಅವರ ಫರ್ಮಾನು ಬೇಕು. ಅದನ್ನು ಜಾರಿಗೆ ತರುವುದಷ್ಟೇ ನಮ್ಮ ಕೆಲಸ" ಎನ್ನುವ ಸ್ವಾಮೀಜಿಗಳು, "ನಮ್ಮಲ್ಲೂ (ಹರಿಹರಪುರ ಮಠದ ಕಲ್ಯಾಣ ಮಂಟಪದಲ್ಲಿ) ಎಷ್ಟೋ ಸಗೋತ್ರ ವಿವಾಹಗಳು ನಡೆಯುತ್ತವೆ. ನಾವು ಯಾವುದಕ್ಕೂ ಆಕ್ಷೇಪಣೆ ಮಾಡುವುದಿಲ್ಲ" ಎನ್ನುತ್ತಾರೆ. [ಶೃಂಗೇರಿ ಗುರುಗಳು ಪ್ರವಾಸದಿಂದ ಹಿಂದಿರುಗಿದ ನಂತರ ನಾವು ಅವರನ್ನೂ ಭೇಟಿಯಾಗಬೇಕೆಂದಿದ್ದೇವೆ.]

ಆದರೆ ಸಗೋತ್ರ ವಿವಾಹದಿಂದ ತೊಂದರೆಯಾಗುತ್ತದೆ ಎಂದೇ ಅವರು ಹೇಳುತ್ತಾರೆ. "ನಾವು ಸಗೋತ್ರ ವಿವಾಹದ ಎಲ್ಲ ಪ್ರಕರಣಗಳನ್ನೂ ಪಟ್ಟಿ ಮಾಡಿ ಇಟ್ಟಿದ್ದೇವೆ. ಒಂದಲ್ಲ ಒಂದು ರೀತಿ ತೊಂದರೆಯಾದ ಬೇಕಾದಷ್ಟು ಉದಾಹರಣೆಗಳಿವೆ. ಡಾ|| ಶಿವರಾಮ ಕಾರಂತರೂ ಕೂಡ ಈಗ ಒಪ್ಪುತ್ತಾರೆ. ಮೊದಲು ಅವರು ಒಪ್ಪಿರಲಿಲ್ಲ. ರಕ್ತದಲ್ಲಿ ಎ, ಬಿ ಇತ್ಯಾದಿ ಗುಂಪುಗಳಿವೆಯಲ್ಲ, ಹಾಗೇ ಇದೂ ಕೂಡ. ಒಂದು ಗುಂಪಿಗೆ ಅದೇ ಗುಂಪಿನ ಜೋಡಿ ಮಾಡಿದರೆ ಅನರ್ಥ ಆಗುತ್ತೆ. ನಮ್ಮ ಪೂರ್ವಿಕರು ಇದನ್ನೆಲ್ಲ ಯೋಚಿಸಿಯೇ ಮಾಡಿದ್ದಾರೆ, ಸುಮ್ಮನೆ ಅಲ್ಲ" ಎಂದು ಅವರ ಅಭಿಪ್ರಾಯ.

"ಸಗೋತ್ರ ವಿವಾಹಿತರಿಗೆ ಬರುವ ಅನರ್ಥಗಳೇ ಸಗೋತ್ರವಲ್ಲದವರಿಗೂ ಆಗಿರುವ ಬೇಕಾದಷ್ಟು ಉದಾಹರಣೆಗಳಿವೆಯಲ್ಲ?" ಎಂಬ ಪ್ರಶ್ನೆಯನ್ನಾಗಲಿ, "ಪ್ರಪಂಚದ ಜನಸಂಖ್ಯೆಯಲ್ಲಿ ನೂರರಲ್ಲಿ ತೊಂಬತ್ತೊಂಬತ್ತರಷ್ಟು ಮುಕ್ಕಾಲು ಪಾಲು ಜನ ಇದನ್ನೆಲ್ಲ ನೋಡುವುದಿಲ್ಲ. ಅವರಿಗೆಲ್ಲ ಆಗದ ಅನರ್ಥ ಇನ್ನುಳಿದ ಕಾಲು ಪಾಲು ಜನರಿಗೆ ಆಗುತ್ತೆಂದು ಹೆದರಿ ಇಷ್ಟು ದೊಡ್ಡದೊಂದು ಸಮಸ್ಯೆಯನ್ನು ಉಳಿಸಿಕೊಳ್ಳುವುದೆ?" ಎಂಬುದನ್ನಾಗಲಿ ಅವರು ತಿರಸ್ಕರಿಸುತ್ತಾರೆ. "ಒಟ್ಟಿನಲ್ಲಿ ತೊಂದರೆಯಾಗುತ್ತದೆ. ಸಗೋತ್ರ ವಿವಾಹ, ವರ್ಣಸಂಕರ ಎರಡೂ ಸರ್ವಥಾ ಕೂಡದು" ಎಂದೂ ಅವರು ಅಭಿಪ್ರಾಯಪಡುತ್ತಾರೆ.

[ಈ ಚರ್ಚೆಯನ್ನು ಮುಂದುವರಿಸಿ ಇನ್ನೂ ಪತ್ರಗಳು ಬರುತ್ತಿವೆ. ಹಲವರು ಹಲವಾರು ಉಪಯುಕ್ತ ಅಂಶಗಳ ಬಗ್ಗೆ ಪ್ರಶ್ನೆಗಳನ್ನೆತ್ತಲು, ಉತ್ತರ ಹುಡುಕಲು ಪ್ರಯತ್ನಿಸಿದ್ದರೆ, ಇನ್ನು ಕೆಲವರು ನಾವು ಮಠಾಧೀಶರ ಅಭಿಪ್ರಾಯ ಕೇಳಿದ್ದು ಸರಿಯೆ ತಪ್ಪೆ ಎಂಬ ಚರ್ಚೆ ನಡೆಸಿದ್ದಾರೆ. ಅಂತೂ ಬಹಳ ಜನ ಓದುಗರು ಚರ್ಚೆಯಲ್ಲಿ ಆಸಕ್ತಿ ತೋರಿಸಿದ್ದಾರೆ.

ಓದುಗರಲ್ಲಿ ಈ ಚರ್ಚೆ ಇಷ್ಟು ಆಸಕ್ತಿ, ಪ್ರತಿಕ್ರಿಯೆ ಕೆರಳಿಸಿದ್ದರೂ ಕೆಲವು ಹಿರಿಯರು ನಮ್ಮ ಪತ್ರದ ಹಿಂದಿನ ಪ್ರಾಮಾಣಿಕ ಉದ್ದೇಶವನ್ನು ಅರ್ಥ ಮಾಡಿಕೊಳ್ಳದೆ ಅಸಹನೆ ಪಟ್ಟಿದ್ದು ನಮ್ಮ ಗಮನಕ್ಕೆ ಬಂದಿದೆ. ನಾವು ಗುರುಗಳ ಅಭಿಪ್ರಾಯ ಕೇಳಿದ್ದು ಉದ್ಧಟತನ ಎಂದು ಅವರ ದೃಷ್ಟಿ. ವಿಚಾರ ಮಂಥನವನ್ನೇ ಸಹಿಸದ, "ಈ ಬಾವಿಯೇ ಜಗತ್ತು" ಎಂದು ಸಾಧಿಸುವ ಈ ಪ್ರವೃತ್ತಿಗೆ ಬೇಸತ್ತು ಈ ಚರ್ಚೆಯನ್ನು ಸದ್ಯಕ್ಕಾದರೂ ಇಲ್ಲಿಗೇ ಕೈಬಿಡುತ್ತೇವೆ.

'ಮನಸ್ಸು ಬಿಚ್ಚಿ ಮಾತಾಡಲು' ಯತ್ನಿಸಿದ ಓದುಗರನ್ನು ಈ ರೀತಿ ನಿರಾಶೆಗೊಳಿಸುತ್ತಿರುವುದಕ್ಕೆ ನಮಗೇ ನಿರಾಶೆಯಿದೆ.

**-ಸಂಪಾದಕ]**

## ಎಲವೊ ವರನೇ ಕೇಳು!

ಇಂದಿನ ಸಮಾಜದಲ್ಲಿ ವರನದೇ ಆಟ
ಕನ್ಯಾಪಿತೃಗಳ ಪಾಲಿಗೆ ಬಂದಿದೆ ಪೇಚಾಟ
ವರನನ್ನು ಅರಿಸಿ ಊರೂರ ತಿರುಗಾಟ
ಮಗಳ ಮದುವೆ ಬಡ ತಂದೆಯ ಪಾಲಿಗೊಂದು ಕಂಟಕ
ಅಳಿಯನ ಬೇಡಿಕೆಯನ್ನು ಸಲ್ಲಿಸಲಾರದೆ ಅನುಭವಿಸುವನು ಸಂಕಟ
ತನ್ನ ಬೆಲೆ ತನಗೆ ಸಿಗದಿದ್ದಾಗ ಮಂಟಪದಲ್ಲಿಯೇ ವರನ ಕೂಗಾಟ
ದೊಡ್ಡ ಗಡಿಗೆಯಂತೆ ಊದಿಕೊಳ್ಳುವುದು ಬೀಗನ ಮುಖ
ತಂದೆತಾಯಿಯರು ಬಯಸುವರು ಮಗಳ ಸುಖ
ತಮ್ಮಾಸ್ತಿ ಮಾರಿ ತೃಪ್ತಿಪಡಿಸುವರು ಅಳಿಯನ್ನ
ಇಂದಿನ ವರ ಮುಂದೊಬ್ಬ ಮಾವ
ಮಗಳ ಮದುವೆಯನ್ನು ಕಾಣಲು ಹಾತೊರೆಯುವುದು ಜೀವ
ಆಗ ಅನುಭವಿಸಬೇಕು ಅವನೂ ಆ ನೋವ
ಮದುವೆಯ ಪ್ರಯತ್ನಕ್ಕೆ ಹೋದಾಗ ವರದಕ್ಷಿಣೆಯ ಮಾತೆ
ಎಲವೊ ಎ ವರನೆ ಆಗ ನೀ ಸೋತೆ
ಮಗಳಿಗೆ ಬೇಕು ಯುವಕನೊಬ್ಬನ ಆಸರೆ
ತಂದೆ ಬಿಡಿಸಿಕೊಳ್ಳಬೇಕು ಕನ್ಯಾಸೆರೆ
ಆಗವನ ಮುಖದಲ್ಲಿ ಚಿಂತೆಯ ಗೆರೆ
ಅಳಿಯನ ಬೇಡಿಕೆಯನ್ನು ಸಲ್ಲಿಸಲು ಕೈಯಲ್ಲಿ ಕಾಸಿಲ್ಲ
ದುಡಿದು ಸಂಪಾದಿಸಲು ಮೈಯಲ್ಲಿ ಬಲವಿಲ್ಲ
ಹಗಲಿರುಳು ಕಾಡುವುದು ನಿನ್ನನ್ನು ಚಿಂತೆ
ನಿನ್ನಳಿಯ ಕೇಳುವನು ಹಣದ ದೊಡ್ಡ ಕಂತೆ
ಆಗ ತಿಳಿವುದು ನಿನಗೆ ನಿನ್ನ ಮಾವನ ಪಟ್ಟ ಗೋಳು
ಮನವನ್ನು ಕಚ್ಚುವುದು ಪಶ್ಚಾತ್ತಾಪದ ಚೇಳು
ನಿನ್ನನ್ನು ನೀ ಮಾರಿಕೊಳ್ಳದ ನಿರ್ಧಾರ ತಾಳು
ಸಾಗಿಸಿದರೆ ಸಾಗಿಸಬೇಕು ಆದರ್ಶದ ಬಾಳು

**ಎಸ್. ಜಿ. ಲಲಿತಾಕ್ಷಿ,**
ನೆಮ್ಮಾರು ಪಸಿಮನೆ.

[—ಈ 'ಪದ್ಯ' ಪದ್ಯದ ಗುಣಗಳ ದೃಷ್ಟಿಯಿಂದ ಉತ್ತಮವೆನ್ನಿಸದಿದ್ದರೂ ಅದರಲ್ಲಿ ವ್ಯಕ್ತವಾಗಿರುವ ಭಾವದ ದೃಷ್ಟಿಯಿಂದ; ಹಾಗೂ ತೀರ ಹಳ್ಳಿಗಾಡಿನ ಸುಮಾರು ೧೮-೧೯ ರ ಪ್ರಾಯದ ಅರೆ-ವಿದ್ಯಾವಂತ ಹುಡುಗಿ ಬರೆದದ್ದು ಎಂಬ ಕಾರಣದಿಂದ ಗಮನಾರ್ಹವಾಗಿದೆ, ಮೆಚ್ಚುವಂತಿದೆ ಎಂದು ನಮ್ಮ ಆಯ್ಕೆ ಸಮಿತಿಯ ಅಭಿಪ್ರಾಯ]



## "ಲಂಚ ಪಡೆದಿಲ್ಲ; ಉತ್ಸಾಹದಿಂದ ಕೆಲಸ ಮಾಡಿದ್ದೇನೆ."

**ಪಶುವೈದ್ಯರ ಹೇಳಿಕೆ**

ಮಾನ್ಯರೆ,

ತಾ. ೩೦. ೫. ೮೧ ರ ತಮ್ಮ ಪತ್ರಿಕೆಯಲ್ಲಿ ನನ್ನ ಬಗ್ಗೆ ಬಂದ ವಿಷಯದ ಬಗ್ಗೆ ನನಗೆ ಹೇಳಬೇಕೆನ್ನಿಸುವುದು ಇಷ್ಟು:

ನಾನು ಕೊಪ್ಪದಲ್ಲಿ ಪಶುವೈದ್ಯಾಧಿಕಾರಿಯಾಗಿ ಸುಮಾರು ಎರಡುವರ್ಷದ ಮೇಲಾಯಿತು. ಬಂದಂದಿನಿಂದ ಬಹಳ ಉತ್ಸಾಹದಿಂದ ಕೆಲಸ ಮಾಡಿದ್ದೇನೆ. ಸಾವಿರಾರು ಜಾನುವಾರುಗಳಿಗೆ ಹಗಲು ರಾತ್ರಿ ಎನ್ನದೆ ಅವು ಇದ್ದ ಜಾಗದಲ್ಲೆ ಪಶುವೈದ್ಯಕೀಯ ನೆರವನ್ನು ನೀಡಿ ಅವುಗಳನ್ನು ಪಾರುಮಾಡಿದ್ದೇನೆ.

ಅಲ್ಲದೆ ನಾನು ಬಂದಾಗಿನಿಂದ ಕೊಪ್ಪ ಟೌನಿನಲ್ಲೆ ಸುಮಾರು ೧೫೦ ಕರುಗಳು ನಾನು ಮಾಡಿದ ಇಂಜಕ್ಷನ್ನಿನಿಂದ ಹುಟ್ಟಿರುವುದು ಪಶು ಪಾಲಕರಿಗೂ ತಿಳಿದಿದೆ. ಇಂತಹ ಕೆಲಸ ಈಗಲೇ ಆಗಿರುವುದು ಎಂಬುದು ಕೊಪ್ಪದ ಜನತೆಗೆ ತಿಳಿದಿದೆ.

ಹಳ್ಳಿಗಳಿಗೆ ಹೋಗುವಾಗ ಆಟೋರಿಕ್ಷಾ ತರಲು ಒತ್ತಾಯಿಸದೆ ನನ್ನ ಸ್ವಂತ ಸ್ಕೂಟರಿನಲ್ಲಿ ಒಯ್ಯುತ್ತಿದ್ದೆ. ಇದಕ್ಕಾಗಿ ಜನ ಪೆಟ್ರೋಲ್ ಹಾಕಿಸಿ ಸ್ಕೂಟರ್ ಖರ್ಚು ಅಂತ ೧೦ ರಿಂದ ೨೫ ರೂ. ವರೆಗೆ ಕೊಡುತ್ತಿದ್ದರು. ಅಷ್ಟೇ ಹೊರತು ಎಲ್ಲೂ "ಇಷ್ಟು ಕೊಡಿ" ಅಂತ ಕೇಳಿ ಪಡೆದಿಲ್ಲ. ಆಸ್ಪತ್ರೆಯಲ್ಲಿ ನಡೆಸಿದ ಚಿಕಿತ್ಸೆಗೆ ಯಾರಿಂದಲೂ ಒಂದು ಬಿಡಿಗಾಸೂ ತೆಗೆದುಕೊಂಡಿಲ್ಲ.

ನನ್ನಿಂದ ಸಹಾಯ ಪಡೆದ ಪಶುಪಾಲಕರು ನನ್ನ ಬಗ್ಗೆ ಬಹಳ ಗೌರವದಿಂದ ಇದುವರೆಗೂ ಕಂಡಿರುವುದು ನನಗೆ ಹೆಮ್ಮೆ ಎನಿಸಿದೆ. ನಾನು ಕೊಪ್ಪದಲ್ಲಿ ಸಾಕಷ್ಟು ಸುಧಾರಣೆಯ ಕೆಲಸ ಮಾಡಿರುವುದೂ ಹಗಲು-ರಾತ್ರಿ ಎನ್ನದೆ ದುಡಿದಿರುವುದೂ ಪಶುಪಾಲಕರಿಗೆ ಮಾತ್ರ ಗೊತ್ತು ಎಂದು ಹೇಳಿ ಇನ್ನೂ ಇತರ ವಿಷಯಗಳು ಜನತೆಗೆ ತಿಳಿದಿರುವುದರಿಂದ ಪ್ರತಿಕ್ರಿಯೆಯನ್ನು ಕೊಡುವುದು ಅಗತ್ಯವಿಲ್ಲವೆಂದು ತಿಳಿದಿದ್ದೇನೆ.

**-ನಾರ್ವೆಸಾರಥಿ**

## ಕೊಪ್ಪ ಪುರಸಭೆ ಹಣ ದುರುಪಯೋಗ ನಡೆದಿಲ್ಲ

ಕೊಪ್ಪ ಪುರಸಭೆ ನಿವೇಶನಗಳ ಹರಾಜು ಸಂಬಂಧ ಭಾರಿ ಹಣ ದುರುಪಯೋಗ ನಡೆದಿದೆಯೆಂಬ ಪತ್ರಿಕಾ ವರದಿಗಳ ಬಗ್ಗೆ ಪುರಸಭೆ ಆಶ್ಚರ್ಯ ವ್ಯಕ್ತಪಡಿಸಿದೆ.

ಒಂದು ರಸೀದಿ ಪುಸ್ತಕ (ನಂ. ೧೨೪) ಕಳೆದಿದೆಯಾದರೂ ಅದರಲ್ಲಿ ಸಂಗ್ರಹಿಸಿದ್ದ ಸುಮಾರು ೩೦ ಸಾವಿರ ರೂ. ಗಳು ಸಕಾಲದಲ್ಲಿ ಜಮಾ ಆಗಿದೆ. ಅಲ್ಲದೆ ಪಾರ್ಟಿಗಳಿಗೆ ಕೊಟ್ಟಿದ್ದ ರಸೀದಿಗಳನ್ನು ಒಂದಕ್ಕೆ ತರಿಸಿಕೊಂಡು ದಾಖಲೆಯಿಡಲಾಗಿದೆ. ರಸೀದಿ ಪುಸ್ತಕ ಕಳೆದಿರುವ ಬಗ್ಗೆ ಸಂಬಂಧಪಟ್ಟ ಇಬ್ಬರು ನೌಕರರಿಗೆ ನೋಟೀಸು ಜಾರಿ ಮಾಡಲಾಗಿದೆ. ಈ ಸಂಬಂಧ ಭೇಟಿ ಕೊಟ್ಟಿದ್ದ ಲೋಕಲ್ ಆಡಿಟ್ ಸರ್ಕಲ್‌ನ ಸಹಾಯಕ ನಿಯಂತ್ರಣಾಧಿಕಾರಿಯವರು ರಸೀದಿಗಳ ನಕಲಿಗೂ ಹಣ ಜಮೆಯಾಗಿರುವುದಕ್ಕೂ ತಾಳೆಯಾಗಿರುವುದನ್ನು ಖಚಿತಪಡಿಸಿಕೊಂಡಿದ್ದಾರೆ. ಪುಸ್ತಕ ಕಳೆದ ಬಗ್ಗೆ ಮಾತ್ರ ಮೇಲಧಿಕಾರಿಗಳಿಗೆ ವರದಿ ಮಾಡಲಾಗಿದೆ.

ಈ ವಿಷಯವನ್ನು ಪತ್ರಿಕೆಗೆ ತಿಳಿಸಿದ ಅಧ್ಯಕ್ಷ ಮೊಹಮದ್ ಸಾದಿಕ್‌ರವರು, "ಮುಖ್ಯಾಧಿಕಾರಿಗಳು ಬೆಂಗಳೂರು ಮುಂತಾದ ಕಡೆ ಭೇಟಿ ಕೊಟ್ಟಿರುವುದು ಸರ್ಕಾರಿ ಕೆಲಸಕ್ಕಾಗಿಯೇ. ಮತ್ತು ವದಂತಿ, ಇತ್ತೀಚೆಗೆ ಬಂದ ಒಂದೇ ವರ್ಷದಲ್ಲಿ ಅವರಿಗೆ ಪುನಃ ಮೂಡಿಗೆರೆಗೇ ವರ್ಗವಾಗುವ ಸೂಚನೆಯಿದ್ದು, ಇಂಥ ಅನುಭವಿ, ನಿಷ್ಠಾವಂತ ಅಧಿಕಾರಿಯನ್ನು ಪೂರ್ಣ ಅವಧಿಗೆ ಇಲ್ಲೇ ಉಳಿಸಿಕೊಳ್ಳಲು ಪುರಸಭೆ ಎಲ್ಲ ಪ್ರಯತ್ನ ನಡೆಸುತ್ತಿದೆ" ಎಂದಿದ್ದಾರೆ.

## ತಾ. ಅ. ಮಂ. ಬಜೆಟ್ ಹರಿಜನ-ಗಿರಿಜನರಿಗಾಗಿ ೭೫ ಸಾವಿರ ರೂ.

ಕೊಪ್ಪ: ೮೨-೮೩ನೇ ಸಾಲಿಗೆ ತಾ. ಅ. ಮಂಡಳಿಯ ಸುಮಾರು ೯ ಲಕ್ಷ ರೂ. ಗಳ ಉಳಿತಾಯ ಬಜೆಟ್ ಜಿಲ್ಲಾಧಿಕಾರಿಗಳಿಂದ ಮಂಜೂರಾಗಿದೆ.

ಹರಿಜನ-ಗಿರಿಜನರ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಶೇ. ೧೮ ಭಾಗ ಮೀಸಲಿಡುವ ನಿಯಮದಂತೆ ೭೫ ಸಾವಿರ ರೂ. ಗಳನ್ನು ಮೀಸಲಾಗಿಡಲಾಗಿದೆ.

ಜೂನ್ ೧೫ ರಂದು ನಡೆದ ಮಂಡಳಿಯ ಸಾಮಾನ್ಯ ಸಭೆಯಲ್ಲಿ, ಈ ವರ್ಷ ಆರಂಭವಾಗಲಿರುವ ಪ್ರಥಮ ದರ್ಜೆ ಕಾಲೇಜಿಗೆ ಪೀಠೋಪಕರಣಗಳಿಗಾಗಿ ೨ ಸಾವಿರ ರೂ. ಗಳ ವಂತಿಗೆಯನ್ನು, ನಾರ್ವೆ ಪ್ರೌಢಶಾಲೆ ಹಾಗೂ ಉತ್ತಮೇಶ್ವರ ಆಸ್ಪತ್ರೆಗಳಿಗೆ ತಲಾ ೨ ಸಾವಿರ ರೂ. ಗಳನ್ನು ಕೊಡಲು ತೀರ್ಮಾನಿಸಿದೆ.

## ಕಳ್ಳನ ಬಂಧನ

ಕೊಪ್ಪ: ಜೂನ್ ೧೪ ರಂದು ಸಂತೆಯ ದಿನ ಸಿನಿಮಾ ಮಂದಿರದ ಬಳಿ ಚಂದ್ರಶೇಖರ್ ಎಂಬವರ ೮೦ ರೂ. ಹಾರಿಸಿದ ಅಬ್ದುಲ್ ಹಮೀದ್ ಎಂಬಾತನನ್ನು ಇಲ್ಲಿಯ ಪೊಲೀಸ್ ಮುಖ್ಯಾಧಿಕಾರಿ [illegible] ಎಂಬುವರು ಹಿಡಿದು ಬಂಧಿಸಿದ್ದಾಗಿ ತಿಳಿದು ಬಂದಿದೆ. ಆರೋಪಿ ಈಗ ನ್ಯಾಯಾಂಗ ಬಂಧನದಲ್ಲಿದ್ದಾನೆ.

ಇದೇ ಕಳ್ಳ ಹೋದ ವರ್ಷ ನಾರ್ವೆಯ ಗಿಡ್ಡ ದನದವರು [illegible] ದಿನ ಸಂತೆ ದಿನ ೨೦೦ ರೂ. ಕಳೆದುಕೊಂಡಿದ್ದಾರೆ. ಆದರೆ ಪೋಲೀಸಿಗೆ ದೂರು ಕೊಟ್ಟಿಲ್ಲವೆಂದು ತಿಳಿದು ಬಂದಿದೆ.

## ಕೊಪ್ಪ ಪಶು ವೈದ್ಯರಿಗೆ ವರ್ಗ

ಕೊಪ್ಪ: ಕಳೆದ ಎರಡು ವರ್ಷಗಳಿಂದ ಇಲ್ಲಿನ ಪಶುವೈದ್ಯ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಡಾ|| ಸಿ. ಎಸ್. ಮೂರ್ತಿ ಸಾರಥಿಯವರಿಗೆ ಧಾರವಾಡಕ್ಕೆ ವರ್ಗವಾಗಿದೆ. ಅವರ ಸ್ಥಾನದಲ್ಲಿ ಮೂಡಿಗೆರೆಯಿಂದ ಬಂದಿರುವ ಡಾ|| ಶ್ರೀನಿವಾಸಮೂರ್ತಿ ಅಧಿಕಾರ ವಹಿಸಿಕೊಂಡಿದ್ದಾರೆ.

ರೋಗಗ್ರಸ್ತ ಪ್ರಾಣಿಗಳ ಕೂಲಂಕುಶ ಪರೀಕ್ಷೆಗೆ ಅನುವಾಗುವಂತೆ ಸುಸಜ್ಜಿತ ಪ್ರಯೋಗ ಶಾಲೆಯೊಂದನ್ನು ಸ್ಥಾಪಿಸಲು ಅವರು ಬಹಳ ಪ್ರಯತ್ನ ಮಾಡಿದ್ದರು. ಮೂಡಿಗೆರೆಯ ಗಿರಿಜನ ಅಭಿವೃದ್ಧಿ ಕೇಂದ್ರದಿಂದ ೬ ಸಾವಿರ ರೂ. ಮಂಜೂರು ಕೂಡ ಆಗಿದ್ದು, ಕಡೆಗೆ ಹಣವಿಲ್ಲವೆಂಬ ಕಾರಣದಿಂದ ಯೋಜನೆ ಕಾರ್ಯಗತವಾಗಲಿಲ್ಲ.

## ವಿದ್ಯಾಧಿಕಾರಿಗಳಿಗೆ ಬೀಳ್ಕೊಡುಗೆ

ಕೊಪ್ಪ: ಕಳೆದ ೪ ವರ್ಷಗಳಿಂದ ಇಲ್ಲಿ ಸಹಾಯಕ ವಿದ್ಯಾಧಿಕಾರಿಗಳಾಗಿದ್ದು ರಂಗೇನಹಳ್ಳಿ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ವರ್ಗವಾಗಿರುವ ಎಂ. ಚಂದ್ರಶೇಖರಯ್ಯನವರಿಗೆ ತಾ. ಅ. ಮಂ. ವತಿಯಿಂದ ಜೂನ್ ೧೫ ರಂದು ಬೀಳ್ಕೊಡಿಗೆ ಸಮಾರಂಭ ಏರ್ಪಡಿಸಲಾಗಿತ್ತು.

ಬಿ. ಜಿ. ಚಿದಂಬರ್ ಅಧ್ಯಕ್ಷತೆ ವಹಿಸಿದ್ದರು. ತಹಸೀಲ್ದಾರ್ ಹೆಚ್. ಎಂ. ನಾಗಪ್ಪ, ತಾ. ಅ. ಮಂ. ಸದಸ್ಯ ಕೊಲ್ಲಪ್ಪಗೌಡ, ನೂತನ ಸ. ವಿದ್ಯಾಧಿಕಾರಿ ಮಲ್ಲಯ್ಯ ಅವರುಗಳು ಚಂದ್ರಶೇಖರಯ್ಯನವರ ಸೇವೆಯ ಬಗ್ಗೆ ಮಾತನಾಡಿದರು. ಸಾಕ್ಷರ ವರ್ಷಗಳಿಂದ ತಾ. ಅ. ಮಂ. ಕ್ಕೊಟ್ಟ ಸಹಕಾರವನ್ನು ಚಂದ್ರಶೇಖರಯ್ಯ ಸ್ಮರಿಸಿದರು.

ಬಾಲಣ್ಣಗೌಡ ಸ್ವಾಗತಿಸಿ, ರಾವ್ ರಾಮಚಂದ್ರರಾವ್ ವಂದಿಸಿದರು.

ಚಂದ್ರಶೇಖರಯ್ಯನವರ ಸ್ಥಾನದಲ್ಲಿ ಸಹಾಯಕ ವಿದ್ಯಾಧಿಕಾರಿಗಳಾಗಿ ಅಧಿಕಾರ ವಹಿಸಿಕೊಂಡಿರುವ ಮಲ್ಲಯ್ಯನವರನ್ನು ಇದೇ ಸಂದರ್ಭದಲ್ಲಿ ಸ್ವಾಗತಿಸಲಾಯಿತು.

ಸಂಪಾದಕ, ಪ್ರಕಾಶಕ ಮತ್ತು ಮುದ್ರಕ:
ಸಿರಿಮನೆ ನಾಗರಾಜ್.
ಅಚ್ಚು : ನೇಸರ ಮುದ್ರಣ, ಕೊಪ್ಪ.

## ೨೦ ಅಂಶಕಾರ್ಯಕ್ರಮ ಸಮಿತಿಗೆ ನಾಮಕರಣ

ಕೊಪ್ಪ: ಈ ತಾಲೂಕಿನ ೨೦ ಅಂಶ ಕಾರ್ಯಕ್ರಮ ಸಮಿತಿಗೆ ೨ ವರ್ಷಗಳ ಅವಧಿಗೆ ಈ ಕೆಳಕಂಡವರನ್ನು ಸರ್ಕಾರ ನಾಮಕರಣ ಮಾಡಿದೆ: ಮರಿಯಪ್ಪ, ಕಲ್ಕೆರೆ; ಬಾಗ ಶ್ರೀನಿವಾಸ್, ಟಿ. ವಿ. ನರಸಿಂಹ ಹೇರಳೆ, ತುಳುವಿನಕೊಪ್ಪ.

## ಸಂಜಯಗಾಂಧಿ ಪುಣ್ಯತಿಥಿ ಆಚರಣೆ

ಕೊಪ್ಪ: ತಾ|| ಯುವ ಕಾಂಗ್ರೆಸ್ ಆಶ್ರಯದಲ್ಲಿ ಜೂನ್ ೨೩ ರಂದು ಇಲ್ಲಿನ ಪುರಭವನದಲ್ಲಿ ದಿ|| ಸಂಜಯಗಾಂಧಿಯವರ ೨ ನೇ ಪುಣ್ಯತಿಥಿ ಆಚರಿಸಲಾಯಿತು. ಅಧ್ಯಕ್ಷತೆ ವಹಿಸಿದ್ದ ಯುವ ಕಾಂಗ್ರೆಸ್ ಅಧ್ಯಕ್ಷ ಹೆಚ್. ಎಂ. ಶ್ರೀಧರ್ ಸಂಜಯರ ಐದಂಶದ ಕಾರ್ಯಕ್ರಮ ಕುರಿತು ಮಾತನಾಡಿದರು.

ಕಾರ್ಯಕ್ರಮದ ಅಂಗವಾಗಿ ತೀರ್ಥಹಳ್ಳಿ ರಸ್ತೆಯಲ್ಲಿ ಅರಣ್ಯ ಇಲಾಖೆ ವಸತಿಗೃಹಗಳ ಬಳಿ ಸಸಿ ನೆಡುವ ಕಾರ್ಯಕ್ರಮವಿತ್ತು. ಸದ ದರೀ ರಕ್ತದಾನ ಮಾಡುವ ನಿರ್ಧಾರ ಕೈಗೊಳ್ಳಲಾಯಿತು.

---

ರಾಜ್ಯದಲ್ಲಿ ಕನ್ನಡವನ್ನು "ಏಕೈಕ ಪ್ರಥಮ ಪ್ರಾದೇಶಿಕ ಭಾಷೆ"ಯೆಂದು ವಿಧಾನಸಭೆ ನಿರ್ಣಯಿಸಿದೆ § §

ಕೊಪ್ಪದಲ್ಲಿ ಪ್ರಥಮ ದರ್ಜೆ ನ್ಯಾಯಾಲಯ ಸ್ಥಾಪನೆಗಾಗಿ ಕಟ್ಟಡ ಪರಿಶೀಲಿಸಿದ ಸೆಷನ್ಸ್ ನ್ಯಾಯಾಧೀಶರು ಬಾಳಗಡಿಯಲ್ಲಿ ತೀವ್ರ ಅಭಿವೃದ್ಧಿ ಯೋಜನೆ ಕಚೇರಿಯಿದ್ದ ಕಟ್ಟಡದ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆಂದು ಗೊತ್ತಾಗಿದೆ ‡ ‡

ಚಿಕ್ಕಮಗಳೂರಿನ ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯದಲ್ಲಿ ದೋಷಯುಕ್ತ ಆಹಾರ ಸೇವನೆಯಿಂದ ಒಬ್ಬಳು ಹುಡುಗಿ ಮರಣ ಹೊಂದಿ ಹಲವರು ತೀವ್ರ ಅಸ್ವಸ್ಥರಾದ ಘಟನೆಯ ತೀವ್ರ ತನಿಖೆ ನಡೆಸಿ ತಪ್ಪಿತಸ್ಥರಿಗೆ ಉಗ್ರ ಶಿಕ್ಷೆ ವಿಧಿಸುವಂತೆ ದಲಿತ ಸಂಘರ್ಷ ಸಮಿತಿ, ವಿವಿಧ ರಾಜಕೀಯ ಪಕ್ಷಗಳು, ನಾಗರಿಕರು ಒತ್ತಾಯಿಸಿದ್ದಾರೆ. § §

ನರಸಿಂಹರಾಜಪುರದ ಪುರಸಭೆ ಮುಖ್ಯಾಧಿಕಾರಿ ಸಿ. ಗಂಗಾಧರಯ್ಯನವರನ್ನು ಅವ್ಯವಹಾರ ಸಾಬೀತಾಗಿರುವುದರಿಂದ ಅಮಾನತುಗೊಳಿಸಲಾಗಿದೆಯೆಂದು ವರದಿಯಾಗಿದೆ